ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ವಿಜಯಪುರ ಜಿಲ್ಲೆಯಲ್ಲಿ ಖಿಲಾರಿ ತಳಿಯ ಹಸುಗಳ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ(ಶಿಕ್ಷಕರ ಕ್ಷೇತ್ರ):-

1337 (1611) ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವಿಜಯಪುರ ಜಿಲ್ಲೆಯಲ್ಲಿ ಖಿಲಾರಿ ತಳಿಯಾ ದೇಶಿ ತಳಿಯು ಇಂದಿನ ದಿನಮಾನಗಳಲ್ಲಿ ನಶಿಸಿ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸದರಿ ತಳಿಯನ್ನು ಅಭಿವೃದ್ಧಿಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ;

(ಆ) ವಿಜಯಪುರ, ಬಾಗಲಕೋಟೆ ಮತ್ತು ಮಹಾರಾಷ್ಟ್ರದ ಸಾಂಗಲಿ ಮತ್ತು ಸೊಲ್ಲಾಪುರ ಜಿಲ್ಲೆಗಳಲ್ಲಿ ಆದಿಕಾಲದಿಂದಲೂ ಬದುಕಿ ಬಂದ ಈ ತಳಿಗಳ ಹಸುವಿನ ಪುನರುಜ್ಜೀವನ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ ;

(ಇ) ಸದರಿ ತಳಿಯ ಹೋರಿಗಳು ಮತ್ತು ಹಸುಗಳಿಂದ ಯಾವ ಯಾವ ರೀತಿಯಲ್ಲಿ ರೈತರಿಗೆ ಮತ್ತು ಸಾಮಾನ್ಯ ಜನರಿಗೆ ಅನುಕೂಲವಾಗುತ್ತದೆ ಎಂಬುದು ಸರ್ಕಾರದ ಗಮನದಲ್ಲಿದೆಯೇ;

(ಈ) ಸರ್ಕಾರ ಅಮೃತ ಮಹಲ್ ಕಾಲದಲ್ಲಿ ದೆವಣಿ ತಳಿಗೆ ಬೀದರ್‍ನಲ್ಲಿ ಹಾಗೂ ಮುಧೋಳ್ ನಾಯಿಗಳಿಗೆ ಮುಧೋಳದಲ್ಲಿ ಸಂಶೋಧನಾ ಕೇಂದ್ರಗಳನ್ನು ಪ್ರಾರಂಭಿಸಿದ ರೀತಿಯಲ್ಲಿ ವಿಜಯಪುರದಲ್ಲಿ ಖಿಲಾರಿ ತಳಿಯ ಹಸುಗಳಿಗಾಗಿ ಒಂದು ಸಂಶೋಧನಾ ಹಾಗೂ ಅಭಿವೃದ್ಧಿ ಕೇಂದ್ರ ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ;

(ಉ) ಸದರಿ ಯೋಜನೆಗೆ ಬೇಕಾದ ಹುಲ್ಲುಗಾವಲಿನ ಪ್ರದೇಶ ಮತ್ತು ಇತರೆ ಸೌಲಭ್ಯಗಳು ಸಾಕಷ್ಟು ಇರುವುದರಿಂದ ಕೂಡಲೇ ಈ ಯೋಜನೆಯನ್ನು ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳಲು ಮುಂದಾಗುವುದೇ ?